ಎಂ.ಎಸ್.ಹೆಗಡೆ ಕಣ್ಣೆ

# ಗೇರುಸೊಪ್ಪೆಯಲ್ಲಿ ಜೈನೇತರ ವಾಸ್ತು ಶಿಲ್ಪಾವಶೇಷಗಳು

ಕರ್ನಾಟಕ ರಾಜ್ಯದ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನಲ್ಲಿ ಪೂರ್ವಕ್ಕೆ ೩೨ ಕಿ.ಮೀ ದೂರದಲ್ಲಿರುವ 'ಗೋರುಸೊಪ್ಪೆ' ಪ್ರದೇಶ ಜೈನ ಸಾಳುವ ಮನೆತನದಿಂದ ಸುಮಾರು 400 ವರುಷಗಳಿಗೂ ಮಿಕ್ಕಿ ಆಡಳಿತಕ್ಕೆ ಒಳಗಾಗಿತ್ತು ಎಂಬುದು ಶಾಸನೀಯ ದಾಖಲೆ. ಗೇರುಸೊಪ್ಪೆಯ 'ನಗರಬಸ್ತೀಕೇರಿ' ಎಂಬ ಪ್ರದೇಶದಲ್ಲಿ ಜೈನಧರ್ಮದ ಕುರಿತಾದ ವಾಸ್ತುಶಿಲ್ಪಾವಶೇಷಗಳು ಅಧಿಕವಾಗಿ ಸಿಗುತ್ತವೆಯಾದರೂ ಅನ್ಯಧರ್ಮಗಳಾದ ಶೈವ ಮತ್ತು ವೈಷ್ಣವ ವಾಸ್ತುಶಿಲ್ಪಾವಶೇಷಗಳೂ ಇಲ್ಲದಿಲ್ಲ. ಈ ಪ್ರದೇಶದ ತುಂಬೆಲ್ಲ ಇಂಥ ಅಂಶಗಳು ಗೋಚರಿಸುತ್ತವೆ. ಉದಾಹರಣೆಗಾಗಿ ಗೋವರ್ಧನಗಿರಿ ಮತ್ತು ನಗರ ಎಂಬ ಸ್ಥಳಗಳನ್ನು ಇಲ್ಲಿ ಹೆಸರಿಸಬಹುದು. ಜೈನ ಧರ್ಮಾಚರಣೆಯ ಸಾಳುವ ದೊರೆಗಳು ಈ ಧರ್ಮವನ್ನು ಪ್ರಬಲವಾಗಿ ಅನುಸರಿಸುತ್ತಿದ್ದರೆಂಬುದಕ್ಕೆ ಇತರ ಧರ್ಮಾಯರಿಗೂ ಒಗ್ಗುವ ಹಾಗೆ ಅನ್ಯಧರ್ಮ ಪೋಶಕರೂ ಆಗಿದ್ದರೆಂಬುದಕ್ಕೆ ಅಳಿದುಳಿದ ವಾಸ್ತುಶಿಲ್ಪಾವಶೇಷಗಳು ಮತ್ತು ಶಾಸನಗಳು ಒಳ್ಳೆಯ ಆಧಾರಗಳಾಗಿವೆ.

ನಗರ ಬಸ್ತೀಕೇರಿಯಲ್ಲಿನ ಪ್ರಮುಖ ಬಸದಿಗಳಾದ ಚತುರ್ಮುಖ ಬಸದಿ, ನೇಮನಾಥ ಬಸದಿ, ವರ್ಧಮಾನ ಬಸದಿ ಮತ್ತು ಪಾರ್ಶ್ವನಾಥ[1] ಬಸದಿಗಳಲ್ಲಿ ನಡುವೆ ವಿಸ್ತಾರವಾದ ಪ್ರಾಂಗಣದಲ್ಲಿ ಈ ಶೈವಾಲಯವನ್ನು ನಿರ್ಮಿಸಲಾಗಿತ್ತು. ಇದು ಜೀರ್ಣಾವಸ್ಥೆಯಲ್ಲಿದ್ದರೂ ಕೂಡ ಅಧ್ಯಯನಕ್ಕೆ ಕೆಲವು ಅಂಶಗಳನ್ನು ಕೊಡಬಲ್ಲದು. ಸದ್ಯಕ್ಕೆ ಗರ್ಭಗುಡಿಯಲ್ಲಿರುವ ಶಿವಲಿಂಗ ಮೂಲಸ್ಥಿತಿಯಲ್ಲಿ ಇಲ್ಲವಾದರೂ ಅಭ್ಯಸಿಸುವುದಕ್ಕೆ ಯೋಗ್ಯವಾಗಿದೆ. ಬ್ರಹ್ಮಸೂತ್ರದಲ್ಲಿರುವ ಈ ಲಿಂಗ ಸಾಳುವ ದೊರೆಗಳ ಕೊಡುಗೆಯೇ ಎನ್ನಬಹುದು. ಉಳಿದಲ್ಲಿ ಬಸದಿಗಳ ರಚನೆಯಲ್ಲಿ ಸಾಮ್ಯತೆಯಿದ್ದರೂ ಕೂಡ ಈ ಶೈವಾಲಯದ ರಚನೆ ಅವುಗಳಿಗಿಂತ ತುಸು ಭಿನ್ನತೆಯಿಂದ ಕೂಡಿದೆ. ಈ ಹಿನ್ನೆಲೆಯಲ್ಲಿ ಹೇಳುವುದಾದರೆ ಮುಲತಃ ಇದುಶೈವಾಲಯವೇ ಆಗಿತ್ತೆಂದು ತರ್ಕಿಸಬಹುದು. , ಇಲ್ಲಿಯ ಶೈವಧರ್ಮದ ಅಸ್ಥಿತ್ವದ ಯಾವುದೇ ದಾಖಲೆ ಲಭಿಸಿಲ್ಲ.

ಶೈವ ಧರ್ಮದ ಪ್ರಭಾವ ಗೇರುಸೊಪ್ಪೆಯಲ್ಲಿ ಪ್ರಬಲವಾಗಿತ್ತೆಂಬುದಕ್ಕೆ ಆಧಾರವಾಗಿ ನಗರ ಬಸ್ತೀಕೇರಿಯಲ್ಲಿಯೇ ಇರುವ ಇನ್ನೆರಡು ವೀರಭದ್ರ ವಿಗ್ರಹಗಳು ಸಾಕ್ಷಿಗಳಾಗಿವೆ.[2] ಇದರಂತೆ ಅಳಿದುಳಿದ ವಾಸ್ತುಶಿಲ್ಪಾವಶೇಷಗಳೂ ಕೂಡ ಸಾಕ್ಷಿಗಳು. ವಿಗ್ರಹಗಳನ್ನು ಕಳೆದುಕೊಂಡ ಕೆಲವು ಕಟ್ಟಡಗಳಿದ್ದು, ಇವು ರಚನೆಯಲ್ಲಿ ಬಸದಿಗಳಿಗಿಂತ ಭಿನ್ನವಾಗಿವೆ. ಸರಳ ಅಲಂಕರಣೆಯ ದ್ವಾರಬಂಧಗಳನ್ನು ಹೊಂದಿವೆ. ಈ ಹಿನ್ನೆಲೆಯಲ್ಲಿ ನೋಡಿದರೆ ಬಹುಶಃ ಇಂಥಹ ಅವಶೇಷಗಳು ಶೈವಾಲಯಗಳೇ ಆಗಿದ್ದವೆಂಬುದರಲ್ಲಿ ಸತ್ಯತೆಯಿದ್ದಂತೆ ತೋರುತ್ತದೆ. ಅಲ್ಲಲ್ಲಿ ಬಿದ್ದ ಪಾಣೀಪೀಠ ಭಾಗಗಳೂ ಸಹಿತ ಇಂತಹ ದೇಗುಲಗಳು ಶೈವಾಲಯಗಳೇ ಆಗಿದ್ದವೆಂದು ಪ್ರಚುರ ಪಡಿಸುತ್ತವೆ. ಗಣೇಶನ ಒಂದು ವಿಗ್ರಹ ಹಾಗೂ ನಂದಿಯ ಎರಡು ವಿಗ್ರಹಗಳು ಈ ಪ್ರದೇಶಗಳಲ್ಲಿವೆ. ಈ ಹಿನ್ನೆಲೆಯೊಂದಿಗೆ ಬರೆಯುವುದಾದರೆ ಗೇರುಸೊಪ್ಪೆ ಪ್ರದೇಶ ಶೈವ ಧರ್ಮೀಯದಿಂದಲೂ ಕೇಂದ್ರೀಕರಿಸಲ್ಪಟ್ಟಿರಬೇಕು. ಜೈನ ಸಾಳುವ ಮನೆತನಕ್ಕಿಂತ ಹಿಂದೆಯೇ ಇಲ್ಲಿ ಶೈವ ಧರ್ಮದ ಕಾರ್ಯಚರಣೆಗಳು ನಡೆದಿರಬೇಕೆಂಬುದರಲ್ಲಿ ಸತ್ಯತೆಯಿದೆ. ಕಾರಣ ಗೇರುಸೊಪ್ಪೆಯಲ್ಲಿನ ಸುತ್ತ ಮುತ್ತಲ ಪ್ರದೇಶಗಳಲ್ಲಿ ಕೂಡ ಶೈವಾಲಯಗಳು ಮೂಲ ವಿಗ್ರಹಗಳೊಡನೆ (ಲಿಂಗವೂ ಸೇರಿ) ಜೀರ್ಣವಾಗಿರುವುದು ತೋರುತ್ತದೆ. ಇಂಥಹ ಅವಶೇಷಗಳು ಸಾಳುವ ದೊರೆಗಳ ಅಭಿವೃದ್ಧಿ ದಿನಗಳಿಗಿಂತ ಹಿಂದಿನ ಲಕ್ಷಣಗಳನ್ನು ಸೂಚಿಸುತ್ತವೆ. ಈ ಆಧಾರದ ಮೇಲೆ ಚಿಂತಿಸುವುದಾದರೆ ಗೇರುಸೊಪ್ಪೆಯಲ್ಲಿನ ಶೈವ ಧರ್ಮದ ಹಿನ್ನೆಲೆಯ ಬಗೆಗೆ ಇನ್ನೂ ಹೆಚ್ಚಿನ ಸಂಶೋಧನೆಯಾಗಬೇಕಾಗಿದೆ. ಈ ಕುರಿತ ಪ್ರಯತ್ನ ಅಗತ್ಯ.

ಈ ಪ್ರದೇಶದಲ್ಲಿರುವ ವೈಷ್ಣವ ವಾಸ್ತು ಶಿಲ್ಪಾವಶೇಷಗಳು(ಕೆಲಮಟ್ಟಿಗೆ ಇದೆ) ಅಧ್ಯಯನ ಯೋಗ್ಯ. ಸಾಳುವ ದೊರೆಗಳಲ್ಲಿ ಪ್ರಖ್ಯಾತಳಾದ ರಾಣಿ ಚೆನ್ನಭೈ

ರಾದೇವಿಯ ಕಾಲದಲ್ಲಿ (1575ರಲ್ಲಿ) ನಿರ್ಮಾಣವಾದ ನಗರ ಬಸ್ತೀಕೇರಿಯಲ್ಲಿನ 'ತಿರುವೆಂಗಳನಾಥ ಸ್ವಾಮಿ' ದೇವಸ್ಥಾನವೊಂದು[3] ವಾಸ್ತುಶಿಲ್ಪದ ದೃಷ್ಟಿಯಿಂದ ವಿಶಿಷ್ಟ. ತಿಮ್ಮಪ್ಪ ಸೇನುಭೋವನೆಂಬವನು ಈ ದೇವ ಸ್ಥಾನವನ್ನು ಕಟ್ಟಿಸಿ ಅದರಲ್ಲಿ ತಿರುವೆಂಗಳನಾಥ ಸ್ವಾಮಿ ವಿಗ್ರಹವನ್ನು ಪ್ರತಿಷ್ಠಾಪಿಸಿದನೆಂದೂ, ರಾಣಿ ಚೆನ್ನಭೈರಾ ದೇವಿ ಹೆಸರಿನಲ್ಲಿ ಅಲ್ಲಿ ಪೂಜೆ ಪುನಸ್ಕಾರ ನಡೆಯು ವಂತೆ ನೋಡಿಕೊಂಡನೆಂದೂ ಮತ್ತು ಈ ಕ್ರಮವನ್ನು ತನ್ನ ವಂಶೀಯರು ಮುಂದುವರಿಸಬೇಕೆಂದುಭೂಮಿ ಯನ್ನು ದಾನಮಾಡಿನ ಸಂಗತಿಯನ್ನು ಇದೇ ದೇವಾಲ ಯದ ಆವರಣದಲ್ಲಿರುವ ಶಿಲಾಶಾಸನವು ತಿಳಿಸುತ್ತದೆ.[4] ವಿಗ್ರಹವಿಲ್ಲದಿರುವ ಈಗಿನ ಈ ದೇವಾಲಯ ಜೀರ್ಣ ಸ್ಥಿತಿಯಲ್ಲಿ ಇದೆ.

ವಾಸ್ತುವಿನ್ಯಾಸದ ದೃಷ್ಟಿಯಿಂದ ಹೇಳುವುದಾದರೆ ಗೇರುಸೊಪ್ಪೆಯಲ್ಲಿ ಉಪಲಬ್ಧವಿರುವ ಐತಿಹಾಸಿಕ ಕಟ್ಟ ಡಗಳಲ್ಲಿಯೇ ಇದು ಭಿನ್ನವಾದದ್ದು. ಮೂಲ ಸ್ವರೂಪ ವನ್ನು ತೋರ್ಪಡಿಸುವ ಈ ತಿರುವೆಂಗಳನಾಥ ಸ್ವಾಮಿ ದೇಗುಲದ ಅಧಿಷ್ಠಾನ, ಭಿತ್ತಿ, ಕಪೋತ, ಗರ್ಭಗುಡಿ ಅಂತರಾಳ ಅಥವಾ ನವರಂಗ ಎಂಬ ವಿಭಿನ್ನ ಭಾಗಗ ಳನ್ನು ಗುರುತಿಸಬಹುದು. ಎತ್ತರವಾದ ಅಧಿಷ್ಠಾನವಿದ್ದು ಅಷ್ಟೇನೂ ಅಲಂಕರಣೆಗಳಿಲ್ಲ. ಉಪಾನ, ಜಗತಿ, ಕಂಠ ಮತ್ತು ಗ್ರೀವ ಎಂಬ ಭಾಗಗಳು ಅಧಿಷ್ಠಾನದಲ್ಲಿ ಗೋಚರಿಸುತ್ತವೆ. ಭಿತ್ತಿ ಅಥವಾ ಗೋಡೆ ಭಾಗದಲ್ಲಿ ಕಡಗಲ್ಲುಗಳನ್ನು (ಲ್ಯಾಟ್‌ರೈಟ್) ಶಿಲ್ಪಿ ನಯವಾಗಿ ಮತ್ತು ವಿಶಿಷ್ಠವಾಗಿ ಬಳಸಿಕೊಂಡಿದ್ದಾನೆ.ಗೋಡೆಯ ಹೊರಭಾಗದಲ್ಲಿ ಏರಿಳಿತ ಅಥವಾ ಹಿಂಬಣೆ ಮುಂಬ ಣೆಗಳಿವೆ. ಇಂಥಹ ಪಟ್ಟಿಕೆಗಳು ಗೋಡೆಯ ತುಂಬೆಲ್ಲ ಗೋಚರಿಸುತ್ತವೆ.[5]

ಗರ್ಭಗುಡಿ ಹಾಗೂ ಅಂತರಾಳ (ನವರಂಗ?)ಗಳು ಚಚ್ಚೌಕವಾಗಿದ್ದು ಒಂದೇ ಪ್ರಮಾಣದಲ್ಲಿವೆ. ಇವುಗಳ ಹೊರಗೆ ಪ್ರದಕ್ಷಿಣಾ ಪಥವು ಸುತ್ತುವರಿದಿದೆ. ಇದರಿಂ ದಾಗಿ ಇದೊಂದು ಸಾಂದಾರ ಶೈಲಿಯ ದೇಗುಲ. ಗರ್ಭಗುಡಿ ಹಾಗೂ ಅಂತರಾಳಗಳ ಸಮಪ್ರದೇಶಗಳಿ ಗಿಂತ ತಗ್ಗು ಪ್ರದೇಶದಲ್ಲಿ ಪ್ರದಕ್ಷಿಣಾ ಪಥವಿದೆ. ಪ್ರದ ಕ್ಷಿಣೆ ಮಾಡುವುದರ ಮೂಲಕ ಮೆಟ್ಟಿಲುಗಳನ್ನೇರಿ ಅಂತರಾಳ ಹಾಗೂ ಗರ್ಭಗುಡಿಯನ್ನು ಪ್ರವೇಶಿಸುವ ವ್ಯವಸ್ಥೆಯು ಈ ದೇಗುಲಕ್ಕಿತ್ತು. ಕುಸಿದ ಈ ದೇಗು ಲದ ಸುತ್ತಲೂ ಕಡಗಲ್ಲಿನಿಂದಲೇ ಕೊರೆದ ಕಮಾನಾಕೃತಿಯ ತುಂಡುಗಳು ಬಿದ್ದಿವೆ. ಬಹುಶಃ ಇವು ಗರ್ಭಗುಡಿ ಹಾಗೂ ಗೋಡೆ ಭಾಗದ ತಲೆಯ ಮೇಲಿಂದ ಸಂಪರ್ಕ ಹೊಂದಿದ್ದವು. ಈ ಸಂಶಯಕ್ಕೆ ಬರಲು ಕಾರಣವೇನೆಂದರೆ ಒಂದು ಕಮಾನಾಕೃತಿಯಕಲ್ಲಿನ ತುಂಡು ಗೋಡೆ ಭಾಗಕ್ಕೆ ಸೇರಿಕೊಂಡಿದೆ. ಇಂಥ ವ್ಯವಸ್ಥೆ ಗೇರುಸೊಪ್ಪೆಯಲ್ಲಿಯ ಇನ್ನಾವುದೇ ಅಳಿದುಳಿದ ದೇವಸ್ಥಾನಗಳಲ್ಲಿ ಗಣನೆಗೆ ಬರಲಾರದು. ಅಧಿಷ್ಠಾನ, ಗೋಡೆ, (ಭಿತ್ತಿ), ಪ್ರದಕ್ಷಿಣಾ ಪಥ, ಗರ್ಭಗುಡಿ ಅಂತರಾಳ ಮತ್ತು ಕಮಾನಾಕೃತಿಯ ರಚನೆಗಳಿಂದಾವ್ಯ ತವಾದ ಕಲ್ಲು ತುಂಡುಗಳಲ್ಲಿ ಭಿನ್ನವಾದ ಲಕ್ಷಣಗಳು ಗ್ರಹಿಕೆಗೆ ಬರುತ್ತವೆ. ಪೂರ್ತಿಯಾಗಿ ಕಡಗಲ್ಲುಗಳಿಂದ ರಚನೆಯಾದ ಈ ತಿರುವೆಂಗಳನಾಥ ಸ್ವಾಮಿ ದೇವಾ ಲಯ ಗೇರುಸೊಪ್ಪೆಯ ವಾಸ್ತುವಿನ್ಯಾಸದ ಪ್ರಾದೇಶಿಕ ಶೈಲಿಗೆ ಉತ್ತಮ ಉದಾಹರಣೆ.

ಗೇರುಸೊಪ್ಪೆಯ ಗೋವರ್ಧನಗಿರಿ ಪ್ರದೇಶದಲ್ಲಿ ಹಾಗೂ ನಗರಬಸ್ತೀಕೇರಿ ಎಂಬ ಕೇಂದ್ರ ಪ್ರದೇಶದಲ್ಲಿ ವೈಷ್ಣವ ಧರ್ಮದ ಎರಡು ಹನುಮಂತನ ದೇವಸ್ಥಾನ ಗಳಿದ್ದವೆಂಬುದಕ್ಕೆ ಹನುಮಂತನ ವಿಗ್ರಹಗಳು ಲಭ್ಯವಿವೆ. ಗೋವರ್ಧನಗಿರಿಯ ಕೋಟೆಯ ಆವರಣದಲ್ಲಿರುವ ಒಂದು ವಿಗ್ರಹ ಕೆಲವು ವಾಸ್ತು ಅವಶೇಷಗಳಿಂದ ಇರುವುದನ್ನು ಕಾಣಬಹುದು.[6] ಇನ್ನೊಂದು ವಿಗ್ರಹ ನಗರಬಸ್ತೀಕೇರಿಯ ಆಧುನಿಕ ದೇವಾಲಯದಲ್ಲೂ ಈಗ ಪೂಜೆಗೆ ಒಳಾಗಾಗಿದೆ.[7] ಇದೂ ಅಲ್ಲದೇ ಗೇರೊಸೊಪ್ಪೆಯ ಸುತ್ತಮುತ್ತಲ ಪ್ರದೇಶಗಳಲ್ಲೂ ವೈಷ್ಣವ ದೇವಸ್ಥಾನಗಳು ಇವೆ. ವಿಷ್ಣು ವಿಗ್ರಹಗಳು ಕಂಡುಬರುತ್ತದೆ.

ಈ ನಿಟ್ಟಿನಲ್ಲಿ 'ಗೇರುಸೊಪ್ಪೆ', ಜೈನ ಸಾಳುವ ಮನೆತನದವರಿಂದ ವಿಶೇಷವಾಗಿ ಜೈನ ವಾಸ್ತುಶಿಲ್ಪಾವ ಶೇಷಗಳಿಗೆ ಹೆಸರಾಗಿದ್ದರೂ ಶೈವ, ವೈಷ್ಣವ ಮತ್ತು ಶಾಕ್ತ ವಾಸ್ತುಶಿಲ್ಪಾವಶೇಷಗಳನ್ನು ಕೂಡ ಗಣನೆಗೆ ಮಾಡಬೇಕು. ಕೆಲವೊಮ್ಮೆ ಇದಕ್ಕೆ ಶಾಸನಾಧಾರವಿದೆ. ಈ ಕುರಿತು ಗೇರುಸೊಪ್ಪೆ ಪ್ರದೇಶದಲ್ಲಿರುವ ಜೈನ ಧರ್ಮೇತರ ಶೈವ ಮತ್ತು ವೈಷ್ಣವ ಧರ್ಮಗಳ ಅಸ್ತಿ ತ್ವದ ಅವಶೇಷಗಳಿರುವುದನ್ನು ಸಹ ಗ್ರಹಿಸಿ ಇನ್ನು ಹೆಚ್ಚಿನ ಸಂಶೋಧನೆ ನಡೆಸಬೇಕಾಗಿದೆ.

# ಆಕರ ಗ್ರಂಥಗಳು – ಟಿಪ್ಪಣಿಗಳು

1. ಕಜಿನ್ಸ್, ಹೆನ್ರಿ : "ಗೇರ್ಸಪ್ಪಾ ಓಲ್ಡ್ ಸೈಟ್ ಅಂಡ್ ರುಯಿನ್ ಟೆಂಪಲ್ಸ್' 'ಚಾಲುಕ್ಯನ್ ಆರ್ಕಿಟೆಕ್ಚರ್ ಆಫ್ ದಿ ಕೆನರೀಸ್ ಡಿಸ್ಟ್ರಿಕ್ಟ್' – ಕಲ್ಕತ್ತಾ 1926, ಪುಟ 126.
2. ಹೆಗಡೆ ಕಣ್ಣೆ ಎಂ.ಎಸ್ : "ಗೇರುಸೊಪ್ಪೆ – ಒಂದು ಸಾಂಸ್ಕೃತಿಕ ಅಧ್ಯಯನ", 'ಗೇರುಸೊಪ್ಪೆಯ ಮೂರ್ತಿಶಿಲ್ಪ ಕಲೆ', ಪುಟ 217 – (ಎಂ.ಫಿಲ್.ಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ 1991) ಅಪ್ರಕಟಿತ
3. ಕಾಮತ್ ಸೂರ್ಯನಾಥ ಯು. (ಸಂ) 'ಕರ್ನಾಟಕ ಸ್ಟೇಟ್ ಗೇಜೆಟಿಯರ್ ಉತ್ತರ ಕನ್ನಡ ಡಿಸ್ಟ್ರಿಕ್ಟ್' ಪುಟ. 910.
4. ಎಂ.ಎ.ಆರ್ – 1928 – ಬೆಂಗಳೂರು 1929, ಶಾಸನ .ಸಂಖ್ಯೆ 112, ಪುಟ 101.
5. ಹೆಗಡೆ ಕಣ್ಣೆ ಎಂ.ಎಸ್ : ಗೇರುಸೊಪ್ಪೆ – ಒಂದು ಸಾಂಸ್ಕೃತಿಕ ಅಧ್ಯಯನ. ಗೇರುಸೊಪ್ಪೆ ವಾಸ್ತುಕಲೆ, ಪುಟ 164.
6. ಅದೇ, ಪುಟ 214.
7. ಅದೇ, ಪುಟ 212.